# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1899 |
| 2 | ಸದಸ್ಯರ ಹೆಸರು | : | ಶ್ರೀ ಎಸ್. ರವಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 26.03.2020 |
| 4 | ಉತ್ತರಿಸುವ ಸಚಿವರು | : | ಸನ್ಮಾನ್ಯ ಮುಖ್ಯಮಂತ್ರಿಯವರು |

| | ಪ್ರಶ್ನೆ | ಉತ್ತರ |
|---|---|---|
| (ಅ) | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನವನ್ನು ವಾರ್ಷಿಕ ರೂ.2.00 ಕೋಟಿಯಿಂದ ರೂ.5.00 ಕೋಟಿಗಳಿಗೆ ಹೆಚ್ಚಿಸುವ ಪ್ರಸ್ತಾಪ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನವನ್ನು ರೂ.2.00 ಕೋಟಿಯಿಂದ ರೂ.5.00 ಕೋಟಿಗಳಿಗೆ ಹೆಚ್ಚಿಸುವ ಪ್ರಸ್ತಾಪ ಸರ್ಕಾರದ ಮುಂದೆ ಇರುವುದಿಲ್ಲ |
| (ಆ) | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ ಮಾತ್ರ ಸೀಮಿತವಾಗಿ ಅಂದಾಜು ಮೊತ್ತ ರೂ.5.00 ಲಕ್ಷಗಳಿಗೆ ಮೀರದ ಕಾಮಗಾರಿಗಳನ್ನು ಪ್ರತಿ ವಾರ್ಷಿಕ ನವೀಕರಣ ಬದಲಾಗಿ ಪೂರ್ಣಾವಧಿಯಾಗಿ ತುಂಡು ಗುತ್ತಿಗೆ ನೀಡುವ 4ಜಿ ವಿನಾಯಿತಿಯನ್ನು ನೀಡಬಹುದೇ; ಹಾಗಿದ್ದಲ್ಲಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಈ ಆದೇಶವನ್ನು ಹೊರಡಿಸಲು ಇರುವ ತೊಡಕುಗಳೇನು? | ಈ ವಿಷಯದ ಬಗ್ಗೆ ಈಗಾಗಲೇ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಸರ್ಕಾರದ ಸುತ್ತೋಲೆ ಸಂಖ್ಯೆ:ಯೋಇ 16 ಯೋವಿವಿ 2019, ದಿನಾಂಕ:26.08.2019ರಲ್ಲಿ "ಸರಕಾರದ ಇಲಾಖೆಗಳು, ನಿಗಮ/ಮಂಡಳಿ ಹಾಗೂ ಜಿಲ್ಲಾ ಪಂಚಾಯತ್‌ಗಳು ಕೈಗೊಂಡಿರುವ ರೂ.5.00 ಲಕ್ಷಗಳವರೆಗಿನ ನಿರ್ಮಾಣ ಕಾಮಗಾರಿಗಳಿಗೆ ಕೆ.ಟಿ.ಪಿ.ಪಿ ಕಾಯಿದೆ, ಕಲಂ4(ಇ)ರಡಿ ವಿನಾಯಿತಿ ನೀಡಲಾಗಿರುತ್ತದೆ. ಅದೇ ರೀತಿ, ತಾಲ್ಲೂಕು ಪಂಚಾಯತಿ, ಗ್ರಾಮ ಪಂಚಾಯತಿಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಕೈಗೊಳ್ಳುವ ರೂ.2.00 ಲಕ್ಷದವರೆಗಿನ ಶಾಲಾ ಕೊಠಡಿ ನಿರ್ಮಾಣ ಮತ್ತು ಕಿರು ನೀರು ಸರಬರಾಜು ಕಾಮಗಾರಿಗಳಿಗೆ ಕೆ.ಟಿ.ಪಿ.ಪಿ. ಕಾಯಿದೆ, ಕಲಂ4(ಇಇ) ರಡಿ ವಿನಾಯಿತಿ ನೀಡಲಾಗಿರುತ್ತದೆ. ಆದಾಗ್ಯೂ, ಸದರಿ ವಿನಾಯಿತಿಯಡಿ ಕಾಮಗಾರಿಗಳನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಷ್ಠಾನಗೊಳಿಸತಕ್ಕದ್ದು. ಒಂದೇ ಕಾಮಗಾರಿಯನ್ನು ಮೇಲಿನ ವಿನಾಯಿತಿ ಮಿತಿಯೊಳಗೆ ತರುವ ಕಾರಣಕ್ಕಾಗಿ ಸಣ್ಣ ಸಣ್ಣ ಅಂದಾಜುಗಳಲ್ಲಿ ವಿಭಜಿಸತಕ್ಕದ್ದಲ್ಲ.<br><br>ಒಂದು ವೇಳೆ ಯಾವುದೇ ಪ್ರಾಧಿಕಾರಿ/ಅಧಿಕಾರಿ ಕೆ.ಟಿ.ಪಿಪಿ. ಕಾಯಿದೆ ಮತ್ತು ನಿಯಮಗಳ ಅನುಸಾರ ಟೆಂಡರ್ ಕೈಗೊಳ್ಳುವುದನ್ನು ತಪ್ಪಿಸಲು(Avoid) ಕಾಮಗಾರಿ/ಅಂದಾಜನ್ನು ವಿಭಜನೆ ಮಾಡಿದಲ್ಲಿ, ಅಂತಹವರನ್ನು ಶಿಸ್ತು ನಿಯಮಗಳ ಪ್ರಕಾರ ಗುರುತರ ದಂಡನೆಗೆ ಒಳಪಡಿಸತಕ್ಕದ್ದು. ಎಂಬುದಾಗಿ ಸುತ್ತೋಲೆ ಹೊರಡಿಸಿದ್ದು ಇದು ಚಾಲ್ತಿಯಲ್ಲಿರುತ್ತದೆ |

ಸಂಖ್ಯೆ:ಪಿಡಿಎಸ್ 37 ಕೆಎಲ್ ಎಸ್ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ